# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| 1) | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 893 (811) |
| 2) | ಸದಸ್ಯರ ಹೆಸರು | ಶ್ರೀ ಎನ್.ರವಿಕುಮಾರ್ (ವಿಧಾನಸಭೆಯಿಂದ ಚುನಾಯಿತರಾದವರು) |
| 3) | ಉತ್ತರಿಸಬೇಕಾದ ದಿನಾಂಕ | 10-03-2021 |
| 4) | ಉತ್ತರಿಸಬೇಕಾದ ಸಚಿವರು | ಮಾನ್ಯ ಮೀನುಗಾರಿಕೆ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು |

| | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದ ಎಷ್ಟು ಜಲಾಶಯಗಳಲ್ಲಿ ಮೀನು ಸಾಕಣಿಕೆಯನ್ನು ಮಾಡಲಾಗುತ್ತಿದೆ; ಮೀನು ಸಾಕಾಣಿಕೆ ಮತ್ತು ಮೀನು ಹಿಡಿಯುವುದನ್ನು ಗುತ್ತಿಗೆ ನೀಡುವ ಕುರಿತು ಸರ್ಕಾರದ ನಿಲುವೇನು; | ರಾಜ್ಯದಲ್ಲಿ ಒಟ್ಟು 82 ಜಲಾಶಯಗಳಿದ್ದು, ಈ ಪೈಕಿ 70 ಜಲಾಶಯಗಳಲ್ಲಿ ಮೀನು ಸಾಕಾಣಿಕೆ ಮಾಡಲಾಗುತ್ತಿದೆ. ಸದರಿ ಜಲಾಶಯಗಳಲ್ಲಿ ಮೀನು ಸಾಕಾಣಿಕೆ ಮಾಡಲು ಮೀನುಗಾರರ ಸಹಕಾರ ಸಂಘಗಳಿಗೆ ಗುತ್ತಿಗೆ ಮೂಲಕ ಮತ್ತು ಸಾರ್ವಜನಿಕರಿಗೆ ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುತ್ತಿದೆ, ಹಾಗೂ ಸ್ಥಳೀಯ ಮೀನುಗಾರರಿಗೆ ಇಲಾಖೆ ವತಿಯಿಂದ ಪರವಾನಗಿ ನೀಡುವ ಮೂಲಕ ಮೀನು ಹಿಡುವಳಿ ಮಾಡಲು ಉತ್ತೇಜಿಸಲಾಗುತ್ತಿದೆ. ಪರವಾನಿಗೆ ನೀಡುವ ಜಲಾಶಯಗಳಿಗೆ ಇಲಾಖೆಯಿಂದಲೇ ಮೀನುಮರಿಗಳನ್ನು ದಾಸ್ತಾನು ಮಾಡಿ ಅಭಿವೃದ್ಧಿಪಡಿಸಲಾಗುತ್ತಿದೆ. |
| ಆ) | ಜಲಾಶಯಗಳಲ್ಲಿ ಮೀನುಗಾರಿಕೆಯನ್ನು ಪ್ರೋತ್ಸಾಹಿಸಲು ಸರ್ಕಾರ ಕೈಗೊಂಡ ಕ್ರಮಗಳೇನು; | 2020-21ನೇ ಸಾಲಿನ ಜಲಾಶಯ ಅಭಿವೃದ್ಧಿ ಯೋಜನೆಯಡಿ ಇಲಾಖೆ ವತಿಯಿಂದ ಉಚಿತವಾಗಿ 37 ಜಲಾಶಯಗಳಲ್ಲಿ 1,60,91,400 ಬಲಿತ ಬಿತ್ತನೆ ಮೀನುಮರಿಗಳನ್ನು ದಾಸ್ತಾನು ಮಾಡಿ ಅಭಿವೃದ್ಧಿಪಡಿಸಲಾಗಿದೆ. ಅಲ್ಲದೇ "ಪ್ರಧಾನಮಂತ್ರಿ ಮತ್ಸ್ಯ ಸಂಪದ ಯೋಜನೆ"ಯಡಿ ಜಲಾಶಯಗಳಲ್ಲಿ ಬಲಿತ ಬಿತ್ತನೆ ಮೀನು ಮರಿಗಳನ್ನು ದಾಸ್ತಾನು ಮಾಡಲು ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದವರಿಗೆ ಶೇ 60 ರಷ್ಟು ಹಾಗೂ ಸಾಮಾನ್ಯ ವರ್ಗದವರಿಗೆ ಶೇ 40 ರಷ್ಟು ಸಹಾಯಧನ ನೀಡಲಾಗುತ್ತಿದೆ. |
| ಇ) | ಜಲಾಶಯಗಳಲ್ಲಿ ಮೀನುಗಾರಿಕೆಯನ್ನು ಗುತ್ತಿಗೆ ನೀಡಿದ್ದಲ್ಲಿ, ಸ್ಥಳೀಯ ಮೀನು ಗಾರರಿಗೆ ಅನ್ಯಾಯ ವಾದಲ್ಲಿ ಯಾರು ಹೊಣೆ; ರಾಜ್ಯದ ಎಷ್ಟು ಜಲಾಶಯಗಳಲ್ಲಿ ಮೀನುಗಾರಿಕೆಯ ಗುತ್ತಿಗೆ ನೀಡಲಾಗಿದೆ; ಇದರಿಂದ ಸರ್ಕಾರಕ್ಕೆ ಬರುವ ಆದಾಯ ಎಷ್ಟು? | ರಾಜ್ಯದಲ್ಲಿ 82 ಜಲಾಶಯಗಳಿದ್ದು, ಈ ಪೈಕಿ 19 ಜಲಾಶಯಗಳ ಮೀನುಪಾಶುವಾರು ಹಕ್ಕನ್ನು ನೇರ ಗುತ್ತಿಗೆ ಮುಖಾಂತರ ಮೀನುಗಾರರ ಸಹಕಾರ ಸಂಘಗಳಿಗೆ ಹಾಗೂ 14 ಜಲಾಶಯಗಳ ಮೀನುಪಾಶುವಾರು ಹಕ್ಕನ್ನು ಟೆಂಡರ್-ಕಂ-ಹರಾಜು ಮುಖಾಂತರ ವಿಲೇವಾರಿ ಮಾಡಲಾಗಿರುತ್ತದೆ. ಸದರಿ ಜಲಾಶಯಗಳಲ್ಲಿ ಮೀನುಗಾರರ ಸಹಕಾರ ಸಂಘದ ಸದಸ್ಯರು ಹಾಗೂ ಸ್ಥಳೀಯ ಮೀನುಗಾರರಿಂದ ಮೀನು ಹಿಡುವಳಿ ಮಾಡಿಸಲು ಕ್ರಮವಹಿಸಲಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಸ್ಥಳೀಯ ಮೀನುಗಾರರಿಗೆ ಅನ್ಯಾಯವಾಗುವ ಸಾಧ್ಯತೆಗಳಿರುವುದಿಲ್ಲ. ಅಲ್ಲದೇ, 37 ಜಲಾಶಯಗಳ ಮೀನು ಪಾಶುವಾರು ಹಕ್ಕನ್ನು ಸ್ಥಳೀಯ ಮೀನುಗಾರರಿಗೆ ಪರವಾನಗಿ ನೀಡುವ ಮುಖಾಂತರ ವಿಲೇವಾರಿ ಮಾಡಲಾಗಿದೆ. ಇದರಿಂದ ಒಟ್ಟು ರೂ.2,10,65,507/- ಗಳ ಆದಾಯ ಬಂದಿರುತ್ತದೆ. |

ಸಂಖ್ಯೆ: ಪಸಂಮೀ ಇ-79 ಮೀಇಯೋ 2021

(ಎಸ್. ಅಂಗಾರ)
ಮೀನುಗಾರಿಕೆ ಹಾಗೂ
ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು